

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 168 |
| ಸದಸ್ಯರ ಹೆಸರು | ಶ್ರೀ ಘೋಟ್ನೇಕರ್ ಶ್ರೀಕಾಂತ ಲಕ್ಷ್ಮಣ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 22.09.2020. |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಕಾರವಾರ ಜಿಲ್ಲೆಯ ಜೋಯಿಡಾ ತಾಲ್ಲೂಕಿನ ರಾಮನಗರದಲ್ಲಿ ಸೂಫಾಡ್ಯಾಂ ನಿರ್ಮಾಣಕ್ಕಾಗಿ ಕೃಷಿ ಭೂಮಿಯನ್ನು ಸ್ವಾಧೀನಪಡಿಸಿಕೊಂಡ ಹಿನ್ನೆಲೆಯಲ್ಲಿ ಸದರಿ ಭೂಮಿ ತ್ಯಾಗ ಮಾಡಿದ ನಿರಾಶ್ರಿತರು ಯಾವುದೇ ಉದ್ಯೋಗವಿಲ್ಲದೇ ತಮ್ಮ ಜೀವನ ನಿರ್ವಹಣೆಗೆ ಸಾಲ ಮಾಡಿ ವಾಹನ ತೆಗೆದುಕೊಂಡು ಅಲ್ಲಿಯೇ ಸುತ್ತಮುತ್ತಲಿನ ನದಿ ಪಾತ್ರದಲ್ಲಿ ಮಳೆಗಾಲದಲ್ಲಿ ಬಂದು ಬಿದ್ದಿರುವ ಉಸುಕನ್ನು ತೆಗೆದು ರಫ್ತು ಮಾಡಿ ತಮ್ಮ ಉಪ ಜೀವನ ಸಾಗಿಸುತ್ತಿದ್ದು, ಸಂಬಂಧಿಸಿದ ಇಲಾಖೆಯವರು ಅವರಿಗೆ ತೊಂದರೆ ಮಾಡಿರುವುದರಿಂದ ಸಮಸ್ತ ರಾಮನಗರ ನಿರಾಶ್ರಿತರು ಉಗ್ರ ಪ್ರತಿಭಟನೆ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: (ವಿವರ ನೀಡುವುದು) | ಕಾರವಾರ ಜಿಲ್ಲೆ, ಜೋಯಿಡಾ ತಾಲ್ಲೂಕು, ರಾಮನಗರ ಗ್ರಾಮ ವ್ಯಾಪ್ತಿಯ ಸುತ್ತಮುತ್ತಲಿನ ನದಿ ಪಾತ್ರಗಳ ಪ್ರದೇಶಗಳಲ್ಲಿ ಸಂಗ್ರಹಗೊಂಡಿರುವ ಮರಳನ್ನು ತೆಗೆದು ಸಾಗಾಣಿಕೆ ಮಾಡುತ್ತಿರುವ ನಿರಾಶ್ರಿತರುಗಳಿಗೆ ಇಲಾಖೆಯ ಅಧಿಕಾರಿಗಳು ತೊಂದರೆ ನೀಡುತ್ತಿರುವ ಬಗ್ಗೆ ಸದರಿ ಗ್ರಾಮದ ನಿರಾಶ್ರಿತರು ಇಲಾಖೆಯ ವಿರುದ್ಧ ಯಾವುದೇ ತರಹದ ಪ್ರತಿಭಟನೆ ಮಾಡಿರುವುದು ಕಂಡು ಬಂದಿರುವುದಿಲ್ಲ. |
| (ಆ) | ಹಾಗಿದ್ದಲ್ಲಿ, ಇವರಿಗೆ ಸದರಿ ಮಳೆಗಾಲದಲ್ಲಿ ನದಿ ಪಾತ್ರದಲ್ಲಿ ಬಂದು ಬಿದ್ದಿರುವ ಉಸುಕನ್ನು ರಫ್ತು ಪಡಿಸಿಕೊಳ್ಳಲು ಸರ್ಕಾರದ ನಿಯಮದ ಪ್ರಕಾರ ಅವಕಾಶ ಮಾಡಿಕೊಡಲಾಗುವುದೇ: (ವಿವರ ನೀಡುವುದು) | ನದಿ ಪಾತ್ರದಲ್ಲಿ ಬಂದು ಬಿದ್ದಿರುವ ಉಸುಕನ್ನು ಇವರುಗಳು ರಫ್ತು ಪಡಿಸಿಕೊಳ್ಳಲು ನಿಯಮಗಳಲ್ಲಿ ಅವಕಾಶ ಇರುವುದಿಲ್ಲ.<br><br>2020 ರ ಹೊಸ ಮರಳು ನೀತಿಯಂತೆ, I, II ಮತ್ತು III ನೇ ಶ್ರೇಣಿಯ ಹಳ್ಳ/ತೊರೆ/ಕೆರೆಗಳಲ್ಲಿ ಲಭ್ಯವಿರುವ ಮರಳನ್ನು ವಿಲೇವಾರಿ ಮಾಡುವ ಜವಾಬ್ದಾರಿಯನ್ನು ಗ್ರಾಮ ಪಂಚಾಯಿತಿಗಳಿಗೆ ವಹಿಸಲಾಗಿದೆ. |

| | | |
|---|---|---|
| | | IV, V ಮತ್ತು VI ನೇ ಶ್ರೇಣಿಯ ತೊರೆ/ಹೊಳೆಗಳಲ್ಲಿ ಹಾಗೂ ನದಿ ಪಾತ್ರಗಳಲ್ಲಿ ಮತ್ತು ಜಲಾಶಯ, ಅಣೆಕಟ್ಟು ಹಾಗೂ ಅಣೆಕಟ್ಟಿನ ಹಿನ್ನೀರಿನ ಪ್ರದೇಶದಲ್ಲಿ ಹೂಳಿನೊಂದಿಗೆ ಸಿಗುವ ಮರಳನ್ನು ತೆಗೆದು ಮಾರಾಟ ಮಾಡುವ ಜವಾಬ್ದಾರಿಯನ್ನು ಸರ್ಕಾರಿ ಸ್ವಾಮ್ಯದ ಸಂಸ್ಥೆಗಳಾದ (1) ಹಟ್ಟಿ ಚಿನ್ನಗಣಿ ಕಂಪನಿ ನಿಯಮಿತ ಹಾಗೂ (2) ಕರ್ನಾಟಕ ಸ್ಟೇಟ್ ಮಿನಿರಲ್ಸ್ ಕಾರ್ಪೊರೇಶನ್ ಸಂಸ್ಥೆಗಳಿಗೆ ವಹಿಸಲಾಗಿದೆ. ಈ ಸಂಸ್ಥೆಗಳನ್ನು ಹೊರತುಪಡಿಸಿ ಇತರರು ನದಿ ಪಾತ್ರದಲ್ಲಿನ ಉಸುಕನ್ನು ನೇರವಾಗಿ ತೆಗೆದು ಸಾಗಾಣಿಕೆ ಮಾಡಲು ಅವಕಾಶವಿರುವುದಿಲ್ಲ.<br><br>ಆದರೆ, ಕರ್ನಾಟಕ ಉಪಖನಿಜ ರಿಯಾಯಿತಿ (ತಿದ್ದುಪಡಿ) ನಿಯಮಗಳು, 2016 ರ ನಿಯಮ 31-ZA ರಂತೆ, ಪಟ್ಟಾ ಜಮೀನುಗಳಲ್ಲಿ ದೊರೆಯುವ ಮರಳನ್ನು, ಗಣಿಗಾರಿಕೆ ನಡೆಸಲು ಅವಕಾಶವಿರುತ್ತದೆ.<br><br>ಮುಂದುವರೆದು, Sustainable Sand Mining Guideline - 2016 ರನ್ವಯ ಪ್ರವಾಹದಿಂದ ನದಿ ಪಾತ್ರದ ಪಕ್ಕದ ಕೃಷಿ ಜಮೀನುಗಳಲ್ಲಿ ಸಂಗ್ರಹವಾಗಿರುವ ಮರಳನ್ನು ತೆರವುಗೊಳಿಸಲು ಸರ್ಕಾರವು ಅನುಮತಿಸಿದಲ್ಲಿ, ಜಮೀನಿನ ಮಾಲೀಕರು ತೆರವುಗೊಳಿಸಲು ಕ್ರಮವಹಿಸಬಹುದು. |
| (ಇ) | ಈಗಾಗಲೇ ಜೋಯಿಡಾ ತಾಲ್ಲೂಕಿನ ರಾಮನಗರ ಭಾಗದ ಪಾಂಡರಿ ನದಿ ಬೆಳಗಾವಿಯ ಲೋಂಡಾ ಭಾಗದ ಪ್ರದೇಶದಲ್ಲಿ ಉಸುಕು ತೆಗೆಯಲು ಸರ್ಕಾರ ಅನುಮತಿ ನೀಡಿದ್ದು, 3 ಕಿ.ಮೀ. ಪಕ್ಕದ ಕಾರವಾರ ಜಿಲ್ಲೆಯ ಜೋಯಿಡಾ ತಾಲ್ಲೂಕಿನ ರಾಮನಗರ ನದಿ ಪಾತ್ರದ ಭಾಗದಲ್ಲೂ ಉಸುಕು ತೆಗೆಯಲು ಸಂಬಂಧಿಸಿದ ಇಲಾಖೆ ತೊಂದರೆ ಮಾಡುತ್ತಿದ್ದು, ಈ ಬಗ್ಗೆ ಸರ್ಕಾರ ಕೂಡಲೇ ಸಂಬಂಧಿಸಿದ ನಿರಾಶ್ರಿತರಿಗೆ ನಿಯಮದಂತೆ ಉಸುಕು ರಫ್ತು ಪಡಿಸಲು ಅವಕಾಶ **ಮಾಡಿಕೊಡುವುದೇ? (ವಿವರ** ನೀಡುವುದು) | ಕಳೆದ ಸಾಲಿನಲ್ಲಿ ರಾಜ್ಯದಲ್ಲಿ ಹಾಗೂ ನೆರೆರಾಜ್ಯಗಳಲ್ಲಿ ಭಾರಿ ಮಳೆಯಿಂದಾಗಿ ರಾಜ್ಯದ ನದಿಗಳು ಪ್ರವಾಹ ಮಟ್ಟವನ್ನು ಮೀರಿ ತುಂಬಿ ಹರಿದಿರುವ ಕಾರಣ ನದಿ ಪಾತ್ರಗಳ ವ್ಯಾಪ್ತಿಯ ಪಕ್ಕದ ಕೃಷಿ ಜಮೀನಿನಲ್ಲಿರುವ ಫಲವತ್ತಾದ ಮಣ್ಣು ಕೊಚ್ಚಿ ಹೋಗಿ, ಸದರಿ ಪ್ರದೇಶದಲ್ಲಿ ಮರಳು ಸಂಗ್ರಹಣೆಗೊಂಡಿರುತ್ತದೆ. ಸದರಿ ಮರಳನ್ನು ಕೃಷಿ ಜಮೀನು ಮಾಲೀಕರಿಗೆ ಕೃಷಿ ಯೋಗ್ಯ ಭೂಮಿಯನ್ನಾಗಿ ಪರಿವರ್ತಿಸಲು ಸದರಿ ಮರಳನ್ನು ತೆಗೆದು ಸಾಗಾಣಿಕೆ ಮಾಡಲು ನಿಯಮಿತ ಅವಧಿಗೆ ಸರ್ಕಾರದಿಂದ ಅವಕಾಶ ಕಲ್ಪಿಸಲಾಗಿರುತ್ತದೆ.<br><br>ಬೆಳಗಾವಿ ಜಿಲ್ಲೆ ಖಾನಾಪುರ ತಾಲ್ಲೂಕು ವ್ಯಾಪ್ತಿಯ ಲೋಂಡಾ ಭಾಗದ ಕಾಪೋಲಿ ಗ್ರಾಮ ವ್ಯಾಪ್ತಿಯ **ಪಾಂಡರಿ ನದಿ ಪಾತ್ರದ ಪಕ್ಕದ ಸ ನಂ.53 ರಲ್ಲಿನ ಕೃಷಿ** ಜಮೀನಿನಲ್ಲಿ ಪ್ರವಾಹದಿಂದ ಸಂಗ್ರಹವಾಗಿರುವ ಮರಳನ್ನು ತೆರವುಗೊಳಸಲು ಕೃಷಿ ಜಮೀನು |

| | | |
|---|---|---|
| | | ಮಾಲೀಕರಿಗೆ ಅವಕಾಶ ಕಲ್ಪಿಸಲಾಗಿರುತ್ತದೆ. ಅದರಂತೆಯೇ ಜೋಯಿಡಾ ತಾಲ್ಲೂಕು ರಾಮನಗರ ಗ್ರಾಮ ವ್ಯಾಪ್ತಿಯ ಕೃಷಿ ಜಮೀನಿನಲ್ಲಿ ಪ್ರವಾಹದಿಂದ ಮರಳು ಸಂಗ್ರಹವಾಗಿದ್ದಲ್ಲಿ ಸ್ಥಳ ಪರಿಶೀಲನೆ ನಡೆಸಿ, ಪಟ್ಟಾ ಜಮೀನಿನಲ್ಲಿ ಸಂಗ್ರಹವಾದ ಮರಳನ್ನು ತೆಗೆದು ಸಾಗಾಣಿಕೆ ಮಾಡಲು ಅವಕಾಶ ನೀಡುವ ಬಗ್ಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದಲ್ಲಿ ಪರಿಶೀಲಿಸಲಾಗುವುದು. |

ಸಂಖ್ಯೆ: ಸಿಐ 447 ಎಂಎಂಎನ್ 2020

**(ಸಿ.ಸಿ. ಪಾಟೀಲ)**
ಗಣಿ ಮತ್ತು ಭೂವಿಜ್ಞಾನ ಸಚಿವರು

**ಸಿ.ಸಿ. ಪಾಟೀಲ**
**ಗಣಿ ಮತ್ತು ಭೂವಿಜ್ಞಾನ ಸಚಿವರು**